ಸದನದಲ್ಲಿ ಉತ್ತರಿಸುವ ಪ್ರಶ್ನೆ

ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ಸಾರಿಗೆ ನೌಕರರ ವೇತನ ಪಾವತಿಯಾಗದೆ ಇರುವ ಕುರಿತು

ಶ್ರೀ ಹೆಚ್. ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು) -

12 (02) ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಪ್ರಸಕ್ತ ಸಾಲಿನಲ್ಲಿ ಕೋವಿಡ್ ಸಂಕಷ್ಟದ ಕಾರಣ ಸಾರಿಗೆ ಇಲಾಖೆ ನೌಕರರಿಗೆ ಈವರೆವಿಗೂ ವೇತನ ಪಾವತಿಯಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇಲಾಖೆಯ ನೌಕರರಿಗೆ ಶೀಘ್ರ ವೇತನ ಪಾವತಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಆ) ಸಾರಿಗೆ ಇಲಾಖೆಯ ನೌಕರರಿಗೆ ಎಷ್ಟು ತಿಂಗಳಿನಿಂದ ವೇತನ ಪಾವತಿಯಾಗಿಲ್ಲ; ವೇತನ ಪಾವತಿಗೆ ಅಗತ್ಯವಿರುವ ಹಣವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಇ) ರಾಜ್ಯದ ಯಾವ ವಿಭಾಗದ ಸಾರಿಗೆ ಸಂಸ್ಥೆ ಪ್ರಸಕ್ತ ಸಾಲಿನಲ್ಲಿ ನಷ್ಟದಲ್ಲಿದೆ; ಪ್ರಸಕ್ತ ಸಾಲಿನಲ್ಲಿ ಸಾರಿಗೆ ಇಲಾಖೆಯ ಆದಾಯದ ಗುರಿಯಲ್ಲಿ ಎಷ್ಟು ಪ್ರಗತಿ ಸಾಧಿಸಲಾಗಿದೆ; (ಅಂಕಿ ಅಂಶ ಸಹಿತ ಮಾಹಿತಿ ನೀಡುವುದು)

(ಈ) ಸಾರಿಗೆ ಇಲಾಖೆಯ ಪ್ರಮುಖ ಸೇವೆಗಳಾದ ವಾಹನದ ಮಾಲೀಕತ್ವ ವರ್ಗಾವಣೆ, ಸರಕು ಸಾಗಾಣೆ ಪರವಾನಗಿ, ಫಿಟ್‌ನೆಸ್ ಪ್ರಮಾಣ ಪತ್ರ ನೀಡುವಿಕೆ, ಆನ್‌ಲೈನ್ ಪ್ರಕ್ರಿಯೆ ಜಾರಿಯಲ್ಲಿದೆಯೇ ;

(ಉ) ಜಾರಿಯಾಗಿದ್ದರೆ ಈ ಸೇವೆಗಳ ಆನ್-ಲೈನ್ ಅರ್ಜಿಗಳ ವಿಲೇವಾರಿ ಪ್ರಕ್ರಿಯೆ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿದೆಯೇ? (ಮಾಹಿತಿ ನೀಡುವುದು)